KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಏಪ್ರಿಲ್ ೨೭, ೨೦೦೬ (ವೈಶಾಖ ೭, ಶಕವರ್ಷ ೧೯೨೮) | ಸಂಚಿಕೆ ೧೭ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ತೋಟಗಾರಿಕೆ ಉಪ ನಿರ್ದೇಶಕರವರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು-1**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ತೋಉನಿ:ಕಉ:ವಿನಿ2:1:2006-07, ದಿನಾಂಕ: 10ನೇ ಏಪ್ರಿಲ್ 2006**

ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಬೆಂಗಳೂರು ರವರ ಕಛೇರಿ, ಅಧೀನದ ಕಬ್ಬನ್ ಉದ್ಯಾನವನ, ಬಾಲಭವನಕ್ಕೆ ಹಾಗೂ ಚಾಮರಾಜ ಪ್ರತಿಮೆಯ ಬಳಿ ಬರುವ ಸಾರ್ವಜನಿಕರ ವಾಹನಗಳಾದ ಸೈಕಲ್, ಸ್ಕೂಟರ್, ಮೋಟಾರ್ ಬೈಕ್, ಮತ್ತು ನಾಲ್ಕು ಚಕ್ರ ವಾಹನಗಳಾದ ಕಾರು, ಜೀಪು, ಮೆಟಡಾರ್, ಮ್ಯಾಕ್ಸಿಕ್ಯಾಬ್ ವ್ಯಾನ್ ಮುಂತಾದ ಲಘು ವಾಹನಗಳ (ಸರ್ಕಾರಿ ವಾಹನಗಳು-ಲಾರಿ ಹೊರತುಪಡಿಸಿ) ನಿಲ್ದಾಣ ಶುಲ್ಕವನ್ನು (ಪಾರ್ಕಿಂಗ್ ಫೀ) ವಸೂಲಾತಿ ಮಾಡುವ ಬಗ್ಗೆ ದಿನಾಂಕ: 1.8.2006 ರಿಂದ 31.7.2007ರ ತನಕ ಒಂದು ವರ್ಷದ ಅವಧಿಗೆ ಟೆಂಡರ್ ಕರೆಯಲಾಗಿದೆ. ಆಸಕ್ತಿವುಳ್ಳ ಗುತ್ತಿಗೆದಾರರು ಈ ಮುಂದೆ ಸೂಚಿಸಿರುವ ಷರತ್ತು ಮತ್ತು ನಿಬಂಧನೆಗಳಿಗೆ ಒಪ್ಪಿದ್ದಲ್ಲಿ ಟೆಂಡರ್‌ನಲ್ಲಿ ಭಾಗವಹಿಸುವುದು.

**ವಿವರಗಳು:**

| | | |
|---|---|---|
| 1 | ನಿಗದಿತ ಟೆಂಡರ್ ಫಾರಂ ಮೌಲ್ಯ | ರೂ.500=00 |
| 2 | ಟೆಂಡರ್ ಫಾರಂನ್ನು ಈ ಕಛೇರಿಯಿಂದ ಪಡೆಯುವ ಅವಧಿ | ದಿನಾಂಕ: 25.5.2006 ರಿಂದ 30.5.2006 ರವರೆಗೆ |
| 3 | ಭರ್ತಿ ಮಾಡಿದ ಟೆಂಡರ್ ಫಾರಂನ್ನು ಸ್ವೀಕರಿಸಲು ಕೊನೆಯ ದಿನಾಂಕ | ದಿನಾಂಕ: 31.5.2006 ರಂದು ಸಂಜೆ 4.00 ಗಂಟೆಯವರೆಗೆ |
| 4 | ಮೊಹರಾದ ಟೆಂಡರ್‌ಗಳನ್ನು ತೆರೆಯುವ ದಿನಾಂಕ: (ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ) | ದಿನಾಂಕ: 31.5.2006 ಸಂಜೆ 5.00 ಗಂಟೆಗೆ |
| 5 | ಟೆಂಡರ್ ಸಲ್ಲಿಸುವ ಭದ್ರತಾ ಠೇವಣಿ | ರೂ.40,000=00 |

ನಿಗದಿತ ಅವಧಿ ಮೀರಿದ ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.

ತೋಟಗಾರಿಕೆ ಉಪ ನಿರ್ದೇಶಕರು,
ಕಬ್ಬನ್ ಉದ್ಯಾನವನ, ಬೆಂಗಳೂರು-1.

**ನಿಬಂಧನೆ ಮತ್ತು ಷರತ್ತುಗಳು**

1. ಮೊಹರಾದ ಟೆಂಡರ್‌ನ್ನು ಸಲ್ಲಿಸುವಾಗ ರೂ.40000=00 (ರೂ. ನಲ್ವತ್ತು ಸಾವಿರ ಮಾತ್ರ) ಗಳ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟನ್ನು ಸದಸ್ಯ ಕಾರ್ಯದರ್ಶಿಗಳು, ಬೆಂಗಳೂರು ಗಾರ್ಡನ್ ಟ್ರಸ್ಟ್ ಲಾಲ್‌ಬಾಗ್, ಬೆಂಗಳೂರು ಇವರಿಗೆ ಪಾವತಿಸುವಂತೆ ಪಡೆದು ಸಲ್ಲಿಸಬೇಕು ಇಲ್ಲದಿದ್ದಲ್ಲಿ ಅಂತಹ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
2. ಟೆಂಡರ್ ಅವಧಿ ಮುಗಿದ ನಂತರ ಯಾವುದೇ ಕಾರಣಕ್ಕೂ ಶುಲ್ಕ ವಸೂಲಾತಿ ಅವಧಿಯನ್ನು ವಿಸ್ತರಿಸಲಾಗುವುದಿಲ್ಲ.
3. ಯಶಸ್ವಿ ಟೆಂಡರ್‌ದಾರರನ್ನು 1 ಮತ್ತು 2ನೇ ಹೆಚ್ಚಿನ ಟೆಂಡರ್‌ದಾರರನ್ನು ಹೊರತುಪಡಿಸಿ ಉಳಿದ ಟೆಂಡರ್‌ದಾರರ ಠೇವಣಿ ಹಣವನ್ನು ಮುಕ್ತಾಯದ ನಂತರ ಹಿಂತಿರುಗಿಸಲಾಗುವುದು. ಯಶಸ್ವಿ ಟೆಂಡರ್‌ದಾರರ ಭದ್ರತಾ ಠೇವಣಿ ಹಣವನ್ನು ಟೆಂಡರ್ ಅವಧಿಯನ್ನು ಸಮರ್ಪಕವಾಗಿ ಮತ್ತು ತೃಪ್ತಿಕರವಾಗಿ ಪೂರೈಸಿದ ನಂತರ ಹಿಂದಿರುಗಿಸಲಾಗುವುದು. ಈ ಠೇವಣಿ ಹಣಕ್ಕೆ ಯಾವುದೇ ಬಡ್ಡಿ ಹಣವನ್ನು ಕೊಡಲಾಗುವುದಿಲ್ಲ. ಎರಡನೇ ಅತಿ ಹೆಚ್ಚಿನ ಟೆಂಡರ್‌ದಾರರ ಠೇವಣಿ ಹಣವನ್ನು ಟೆಂಡರ್ ಅನುಮೋದನೆಯ ನಂತರ ಹಿಂದಿರುಗಿಸಲಾಗುವುದು.

4. ಟೆಂಡರ್‌ಗಳನ್ನು ಸಲ್ಲಿಸಲು ಇಚ್ಛಿಸುವವರು ಈ ಕಛೇರಿಯಿಂದ ಖರೀದಿಸಿದ ನಿಗದಿತ ಟೆಂಡರ್ ನಮೂನೆಯಲ್ಲಿ ಮಾತ್ರ ಸಲ್ಲಿಸಬೇಕು. ಈ ಕಛೇರಿಯಿಂದ ಪಡೆದ ಟೆಂಡರ್ ಫಾರಂನಲ್ಲಿ ದರವನ್ನು ನಮೂದಿಸಿರುವ ಟೆಂಡರ್ ಮಾತ್ರ ಒಪ್ಪಿಕೊಳ್ಳಲಾಗುವುದು. ಟೆಂಡರ್‌ನಲ್ಲಿ ಯಾವುದೇ ತಪ್ಪು ಓದಲಾಗದಂತೆ ಬರೆದಿರಬಾರದು. ಸ್ವಚ್ಛವಾಗಿ ನಮೂದಿಸಿರಬೇಕು. ಟೆಂಡರ್‌ನಲ್ಲಿ ಯಾವುದೇ ಪೂರ್ವ ಷರತ್ತುಗಳನ್ನು ನಮೂದಿಸಕೂಡದು.

5. ಯಶಸ್ವಿ ಟೆಂಡರ್‌ದಾರರ : ಅಂತಿಮ ಮೊತ್ತದ ಅಂದರೆ ವಾರ್ಷಿಕ ಮೊತ್ತದ ಶೇಕಡ 50 ಭಾಗದ ಹಣವನ್ನು ಟೆಂಡರ್ ಮುಗಿದ ತಕ್ಷಣ ಸ್ಥಳದಲ್ಲಿಯೇ ಪಾವತಿಸಿ ರಶೀದಿ ಪಡೆಯುವುದು. ಉಳಿದ ಶೇಕಡ 50 ಭಾಗದ ಹಣವನ್ನು ತೋಟಗಾರಿಕೆ ನಿರ್ದೇಶಕರವರಿಂದ ಅನುಮೋದಿಸುವ ದಿನಾಂಕದಿಂದ ಅಥವಾ ಈ ಕಛೇರಿಯಿಂದ ಹಣ ಪಾವತಿಸಲು ಸೂಚಿಸಿದ ದಿನಾಂಕದಿಂದ 3 ದಿನಗಳೊಳಗೆ ಈ ಕಛೇರಿಗೇ ಕಟ್ಟಬೇಕು, ತಪ್ಪಿದ್ದಲ್ಲಿ ಟೆಂಡರ್‌ಗಾಗಿ ಕಟ್ಟಿರುವ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆ. ಹಾಗೂ ಅವರ ಟೆಂಡರ್‌ನ್ನು ತಿರಸ್ಕರಿಸಲಾಗುವುದು.

6. ಟೆಂಡರ್‌ರನ್ನು ಮೊಹರು ಮಾಡಿದ ಲಕೋಟೆಯಲ್ಲಿಟ್ಟು ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಬೆಂಗಳೂರು ಇವರ ವಿಳಾಸಕ್ಕೆ ಕಳುಹಿಸಬೇಕು. ಲಕೋಟೆ ಮೇಲೆ ಕಬ್ಬನ್ ಉದ್ಯಾನವನದಲ್ಲಿ ವಾಹನ ನಿಲುಗಡೆ ಶುಲ್ಕ ವಸೂಲಾತಿಗೆ ಟೆಂಡರ್ ಎಂದು ನಮೂದಿಸಿರಬೇಕು. ಹಾಗೂ ನಿಗದಿತ ಅವಧಿಯೊಳಗೆ ಈ ಕಛೇರಿಗೆ ಕಳುಹಿಸಬೇಕು.

7. ಟೆಂಡರ್‌ದಾರರು ಶುಲ್ಕ ವಸೂಲಾತಿ ಮಾಡುವ ವಾಹನ ನಿಲುಗಡೆ ಜಾಗವನ್ನು ಮೊದಲು ವೀಕ್ಷಿಸಬೇಕು.

8. ಯಶಸ್ವಿ : ಟೆಂಡರ್‌ದಾರರು ಅಂತಿಮ ಸವಾಲಿನ ಹಣವನ್ನು ಅನುಮೋದಿಸಿದ ನಂತರ ವಾಹನ ನಿಲುಗಡೆ ಶುಲ್ಕ ವಸೂಲಿ ಕಾರ್ಯವನ್ನು ವಹಿಸಿಕೊಳ್ಳುವ ಮೊದಲು ರೂ.200=00 ಮೌಲ್ಯದ ಛಾಪ ಕಾಗದದ ಮೇಲೆ ಟೆಂಡರ್‌ನ ಎಲ್ಲಾ ಷರತ್ತು ಮತ್ತು ನಿಬಂಧನೆಗಳಿಗೆ ಬದ್ಧನಾಗಿರುತ್ತೇನೆ. ಎಂಬುದಾಗಿ ಕರಾರು ಪತ್ರವನ್ನು ಬರೆದು ಈ ಕಛೇರಿಗೆ ಸಲ್ಲಿಸಬೇಕು.

9. ವಾಹನ ನಿಲುಗಡೆ ಶುಲ್ಕವನ್ನು ಬೆಳಿಗ್ಗೆ 8.00 ಗಂಟೆಯಿಂದ ರಾತ್ರಿ 7.00 ಗಂಟೆಯ ಅವಧಿಯಲ್ಲಿ ಈ ಮುಂದೆ ಸೂಚಿಸಿದ ದರದಲ್ಲಿ ಮಾತ್ರ ನಿಗದಿಪಡಿಸಿದ ಸ್ಥಳದಲ್ಲಿ ಮಾತ್ರ ವಸೂಲಿ ಮಾಡಬೇಕು. (ಸರ್ಕಾರಿ ವಾಹನ ಮತ್ತು ಇಲಾಖಾ ನೌಕರರ ವಾಹನ ಹೊರತುಪಡಿಸಲಾಗಿದೆ) ವಾಹನ ನಿಲುಗಡೆ ಸ್ಥಳವನ್ನು ಸದಾ ಸ್ವಚ್ಛವಾಗಿಸಿಕೊಳ್ಳಬೇಕು. ಈ ಸ್ಥಳವನ್ನು ಬೇರೆ ಉದ್ದೇಶಕ್ಕೆ ಬಳಸಬಾರದು. ಯಾವುದೇ ರೀತಿ ಸ್ಟಿಕ್ಕರ್ ಹಾಕಬಾರದು.

| ಶುಲ್ಕ ದರ | ಮೊದಲ 3 ಗಂಟೆ ಅವಧಿಗೆ | ನಂತರದ ಹೆಚ್ಚುವರಿ ಅವಧಿಗೆ |
|---|---|---|
| ವಾಹನಗಳ ವಿವರ | ರೂ. | ರೂ. |
| 1. ಬೈಸಿಕಲ್ ಒಂದಕ್ಕೆ | 1.00 | 2.00 |
| 2. ದ್ವಿಚಕ್ರ ವಾಹನ ಒಂದಕ್ಕೆ | 3.00 | 6.00 |
| 3. ಕಾರು ಒಂದಕ್ಕೆ | 5.00 | 10.00 |
| 4. ಮೆಟಡಾರ್, ಮ್ಯಾಕ್ಸಿಕ್ಯಾಬ್ ವ್ಯಾನ್, ಮುಂತಾದ ಲಘು ವಾಹನಗಳಿಗೆ | | |

ಸರ್ಕಾರಿ ವಾಹನಗಳಿಗೆ ಉಚಿತ ನಿಲುಗಡೆ ಒದಗಿಸತಕ್ಕದ್ದು.

(ಲಾರಿ ಮತ್ತು ಭಾರಿ ವಾಹನಗಳನ್ನು ಕಬ್ಬನ್ ಉದ್ಯಾನವನದೊಳಗೆ ಬರುವುದನ್ನು ನಿಷೇದಿಸಲಾಗಿದೆ)

10. ವಾಹನ ನಿಲುಗಡೆ ಶುಲ್ಕ ವಸೂಲಾತಿ ಮಾಡುವ ಅವಧಿಗೆ ಮತ್ತು ದರಗಳ ಬಗ್ಗೆ ಈ ಕಛೇರಿಯ ಅಧಿಕಾರಿಗಳು ಸೂಚಿಸುವ ಸ್ಥಳದಲ್ಲಿ ಸಾರ್ವಜನಿಕರ ಗಮನಕ್ಕೆ ಸ್ಪಷ್ಟವಾಗಿ ಬೋರ್ಡ್ ಮೇಲೆ ಪ್ರಕಟಿಸಬೇಕು. ವಾಹನ ಶುಲ್ಕ ವಸೂಲಾತಿಗೆ ನಿಗದಿತ ದರದಲ್ಲಿ ಯಶಸ್ವಿ ಟೆಂಡರ್‌ದಾರರು ಸ್ವಂತ ಖರ್ಚಿನಿಂದ ಮುದ್ರಿಸುವ ಟಿಕೇಟ್‌ಗಳನ್ನು ಮಾತ್ರ ಉಪಯೋಗಿಸಬೇಕು. ಸಿರಿಯಲ್ ನಂಬರ್‌ನ ಟಿಕೆಟ್ ಬಳಸಬೇಕು. ಕೌಂಟರ್ ಫಾಯಿಲ್ ಇಡಬೇಕು. ಶುಲ್ಕ ವಸೂಲಾತಿ ದರ, ಸ್ಥಳ:ದಿನಾಂಕ: ವಾಹನ ಸಂಖ್ಯೆ: ವಾಹನ ಬಂದ ಮತ್ತು ತೆರಳಿದ ಸಮಯ ಟಿಕೆಟ್‌ನಲ್ಲಿ ನಮೂದಿಸಬೇಕು.

   ಅ) ವಾಹನ ನಿಲುಗಡೆ ತಾಣವನ್ನು ಅವಶ್ಯಕತೆಗನುಗುಣವಾಗಿ ಬದಲಿಸುವ ಹಕ್ಕು ಕೆಳಗೆ ಸಹಿ ಮಾಡಿದವರಿಗಿರುತ್ತದೆ. ಟೆಂಡರ್‌ದಾರರು ಈ ಬದಲಾವಣೆಗೆ ಬದ್ಧರಾಗಿರಬೇಕು.

   ಆ) ಯಶಸ್ವಿ ಟೆಂಡರ್‌ದಾರರು, ವಾಹನದಾರರು, ಇಲಾಖಾ ಸಿಬ್ಬಂದಿ ಮತ್ತು ತೆರಳಿದ ಸಾರ್ವಜನಿಕರ ಜೊತೆ ಸೌಜನ್ಯದಿಂದ ವರ್ತಿಸತಕ್ಕದ್ದು, ಹಾಗೂ ಯಾವುದೇ ದೂರಿಗೂ ಆಸ್ಪದ ನೀಡಬಾರದು, ಈ ಬಗೆಗಿನ ದೂರುಗಳು ಹೆಚ್ಚಿದಲ್ಲಿ ಟೆಂಡರ್‌ದಾರರ ಗುತ್ತಿಗೆ ರದ್ದುಪಡಿಸಲಾಗುವುದು.

11. ವಾಹನ ನಿಲುಗಡೆ ಶುಲ್ಕ ವಸೂಲಾತಿಗೆ ಟೆಂಡರ್ ಅವಧಿಯನ್ನು ಯಾವುದೇ ಕಾರಣಕ್ಕೂ ವಿಸ್ತರಿಸಲಾಗುವುದಿಲ್ಲ. ಹಾಗೂ ನಿಗದಿಪಡಿಸಿರುವ ದರಗಳನ್ನು ಪರಿಷ್ಕರಿಸಲಾಗುವುದಿಲ್ಲ. ಯಶಸ್ವಿ ಟೆಂಡರ್‌ದಾರರು ಅನಧಿಕೃತವಾಗಿ ಹೆಚ್ಚಾಗಿ ಟಿಕೆಟ್ ದರ ವಸೂಲಿ ಮಾಡಬಾರದು ಹಾಗೆ ಮಾಡಿದಲ್ಲಿ ದಂಡ ವಸೂಲಿ ಜೊತೆಗೆ ಟೆಂಡರ್ ರದ್ದುಪಡಿಸಲಾಗುತ್ತದೆ. ಹಾಗೂ ಭದ್ರತಾ ಠೇವಣಿ ಮತ್ತು ಬ್ಯಾಂಕ್ ಗ್ಯಾರಂಟಿ ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆ.

12. ವಾಹನ ನಿಲುಗಡೆ ಶುಲ್ಕ ವಸೂಲಾತಿ ಮಾಡಿದ ನಂತರ ವಾಹನ ಸುರಕ್ಷತೆಯ ಜವಾಬ್ದಾರಿಯು ಟೆಂಡರ್‌ದಾರರದ್ದು ಆಗಿರುತ್ತದೆ. ಇಲಾಖೆ ಜವಾಬ್ದಾರಿ ಇರುವುದಿಲ್ಲ. ಹಾಗೂ ಪ್ರತಿ ವಾಹನಕ್ಕೆ ಪ್ರತ್ಯೇಕ ಟೋಕನ್ ನೀಡಬೇಕು. ಶುಲ್ಕ ವಸೂಲಾತಿಗೆ ಟೆಂಡರ್‌ದಾರರೇ ಸೂಕ್ತ ವ್ಯಕ್ತಿಗಳನ್ನು ನೇಮಿಸಿಕೊಳ್ಳಬೇಕು. ಹಾಗೂ ಅವರಿಗೆ ಗುರುತಿನ ಚೀಟಿ ಯೂನಿಫಾರಂ ನೀಡಿರಬೇಕು.

13. ಯಶಸ್ವಿ ಟೆಂಡರ್‌ದಾರರು ಅಂತಿಮ ಸವಾಲಿನ ಹಣದಷ್ಟೆ ಮೊತ್ತಕ್ಕೆ ಷೆಡ್ಯೂಲ್ ಬ್ಯಾಂಕಿನಿಂದ ಬ್ಯಾಂಕ್ ಗ್ಯಾರಂಟಿ ಪಡೆದು ಒದಗಿಸಬೇಕು. ಹಾಗೂ ಬ್ಯಾಂಕ್ ಗ್ಯಾರಂಟಿ ಅವಧಿಯ ವಾಹನ ನಿಲುಗಡೆ ಶುಲ್ಕ ವಸೂಲಾತಿಯ ಪೂರ್ಣ ಅವಧಿಯನ್ನು ಒಳಗೊಂಡಿರಬೇಕು. ಯಶಸ್ವಿ ಟೆಂಡರ್‌ದಾರರು ಯಾವುದೇ ಷರತ್ತುಗಳನ್ನು ಉಲ್ಲಂಘಿಸಿ ವರ್ತಿಸಿದಲ್ಲಿ ಅವರ ಬ್ಯಾಂಕ್ ಗ್ಯಾರಂಟಿಯನ್ನು ಭದ್ರತಾ ಠೇವಣಿ ಹಣದ ಜೊತೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

14. ಯಶಸ್ವಿ ಟೆಂಡರ್‌ದಾರರು ಶುಲ್ಕ ವಸೂಲಾತಿ ಹಕ್ಕನ್ನು ಬೇರೆಯವರಿಗೆ ಪರಭಾರೆ ವರ್ಗಾವಣೆ ಮಾಡಬಾರದು ಹಾಗೂ ಟೆಂಡರ್‌ದಾರರಿಗೆ ಆಗುವ ಯಾವುದೇ ನಷ್ಟಕ್ಕೆ ಇಲಾಖೆ ಜವಾಬ್ದಾರಿಕೆ ಇರುವುದಿಲ್ಲ.

15. ಟೆಂಡರ್‌ನ್ನು ಯಾವುದೇ ಕಾರಣ ನೀಡದೇ ಒಪ್ಪುವ ಅಥವಾ ತಿರಸ್ಕರಿಸುವ ಹಕ್ಕನ್ನು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-4 ರವರಲ್ಲಿ ಕಾಯ್ದಿರಿಸಲಾಗಿದೆ.

    ಅ) ಟೆಂಡರ್ ಪ್ರಕ್ರಿಯೆ ಮೂಲಕ ನಿರೀಕ್ಷಿತ ಮಟ್ಟದ ಮೊತ್ತವು ಟೆಂಡರ್‌ದಾರರಿಂದ ಸೂಚಿತವಾಗದಿದ್ದ ಪಕ್ಷದಲ್ಲಿ ಮರು ಟೆಂಡರ್ ಮಾಡುವ ಹಕ್ಕನ್ನು ಈ ಕೆಳಗೆ ಸಹಿ ಮಾಡಿದವರು ಹೊಂದಿರುತ್ತಾರೆ.

16. ಟೆಂಡರ್‌ದಾರರು ಕಳೆದ ಸಾಲಿನಲ್ಲಿ ಇನ್‌ಕಮ್ ಟ್ಯಾಕ್ಸ್ ಕ್ಲಿಯರ್‌ನ್ನು ಮಾಡಿದ ದೃಢೀಕರಣ ಪತ್ರವನ್ನು ಆದಾಯ ತೆರಿಗೆ ಇಲಾಖೆಯಿಂದ ಪಡೆದು ಸಲ್ಲಿಸಬೇಕು.

17. ಮೇಲೆ ವಿಧಿಸಿರುವ ನಿಬಂಧನೆಗಳು ಮತ್ತು ಷರತ್ತುಗಳನ್ನು ಟೆಂಡರ್‌ದಾರರು ಪಾಲಿಸದಿದ್ದಲ್ಲಿ ಟೆಂಡರ್ ಷರತ್ತು ಉಲ್ಲಂಘಿಸಿದ ಕಾರಣಕ್ಕಾಗಿ ಕಟ್ಟಿರುವ ಪೂರ್ಣ ಟೆಂಡರ್ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೂ ಟೆಂಡರ್ ತಿರಸ್ಕರಿಸಲಾಗುತ್ತದೆ.

ತೋಟಗಾರಿಕೆ ಉಪ ನಿರ್ದೇಶಕರು,
ಪಿ.ಆರ್. 203 ಕಬ್ಬನ್ ಉದ್ಯಾನವನ, ಬೆಂಗಳೂರು-1.

## ತೋಟಗಾರಿಕೆ ಇಲಾಖೆ
## ತೋಟಗಾರಿಕೆ ನಿರ್ದೇಶನಾಲಯರವರ ಕಛೇರಿ, ಲಾಲ್‌ಬಾಗ್, ಬೆಂಗಳೂರು-4
## ಟೆಂಡರ್ ಪ್ರಕಟಣೆ

**ಸಂಖ್ಯೆ: ತೋಇ/ತೋಬೆ/ಸತೋಅ-1/111/2005-06, ದಿನಾಂಕ: 10ನೇ ಏಪ್ರಿಲ್ 2006**

**ವಿಷಯ:** ರಾಷ್ಟ್ರೀಯ ತೋಟಗಾರಿಕೆ ಮಿಷನ್ ಹಾಗೂ ಕೇಂದ್ರ ಪುರಸ್ಕೃತ ಸಮಗ್ರ ಕೊಕೋ ಅಭಿವೃದ್ಧಿ ಯೋಜನೆಯಡಿ ಬೇಕಾಗುವ ಕೊಕೋ ಕಸಿ ಗಿಡ ಹಾಗೂ ಎಫ್-1 ಹೈಬ್ರಿಡ್ ಗಿಡಗಳನ್ನು ಪೂರೈಸಿಕೊಳ್ಳಲು ಟೆಂಡರ್ ಕರೆಯುವ ಬಗ್ಗೆ.

**ಉಲ್ಲೇಖ:** 1) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999.
2) ಸರ್ಕಾರದ ಆದೇಶ ಪತ್ರ ಸಂಖ್ಯೆ: ಎಸಿ.ಎನ್.ಡಿ.ಸಿ.ಡಿ:1530, ದಿನಾಂಕ: 7.11.2000.
3) Government Order No.FD 9 PCL 2004 (II) dated: 6.8.2005.
4) ಸಂಖ್ಯೆ: ಕೃತೋಇ 122 ತೋಇವಿ 2006, ದಿನಾಂಕ: 06.04.2006

ರಾಷ್ಟ್ರೀಯ ತೋಟಗಾರಿಕೆ ಮಿಷನ್ ಹಾಗೂ ಕೇಂದ್ರ ಪುರಸ್ಕೃತ ಸಮಗ್ರ ಕೊಕೋ ಅಭಿವೃದ್ಧಿ ಯೋಜನೆಯಡಿ ಬೇಕಾಗುವ ಕೊಕೋ ಕಸಿ ಗಿಡ ಹಾಗೂ ಎಫ್-1 ಹೈಬ್ರಿಡ್ ಗಿಡಗಳನ್ನು ಪೂರೈಸಿಕೊಳ್ಳಲು ನೈಜ ಹಾಗೂ ಗೇರು ಮತ್ತು ಕೊಕೋ ಅಭಿವೃದ್ಧಿ ನಿರ್ದೇಶನಾಲಯ, ಕೊಚ್ಚಿನ್ ರವರಿಂದ ಅನುಮೋದಿಸಲ್ಪಟ್ಟಿರುವ ರೈತರು, ನರ್ಸರಿದಾರರು, ಕಮಾಡಿಟಿ ಬೋರ್ಡ್, ಕಾರ್ಪೋರೇಷನ್ಸ್, ಸಂಶೋಧನಾ ಕೇಂದ್ರಗಳು ಹಾಗೂ ಕೃಷಿ ವಿಶ್ವವಿದ್ಯಾನಿಲಯ ರವರಿಂದ (genuine suppliers) ಟೆಂಡರನ್ನು ತೋಟಗಾರಿಕೆ ಇಲಾಖೆಯಿಂದ ಕರೆಯಲಾಗಿದೆ. ಟೆಂಡರ್‌ದಾರರು ದರಗಳನ್ನು ನಮೂದಿಸಿ ಮೊಹರಾದ ಟೆಂಡರನ್ನು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-4 ರವರಿಗೆ ಕಳುಹಿಸತಕ್ಕದ್ದು. ಮೊಹರಾದ ಲಕೋಟೆಯ ಮೇಲೆ "ಕೊಕೋ ಕಸಿಗಿಡ / ಎಫ್-1 ಹೈಬ್ರಿಡ್ ಗಿಡಗಳ ಸರಬರಾಜಿಗೆ ಟೆಂಡರ್ 2006-07" ಎಂದು ನಮೂದಿಸತಕ್ಕದ್ದು. ನಿಗದಿತ ಟೆಂಡರ್ ಫಾರಂಗಳನ್ನು ತೋಟಗಾರಿಕೆ ನಿರ್ದೇಶನಾಲಯದಲ್ಲಿ ರೂ.300-00 (ರೂ.ಮೂರು ನೂರು ಮಾತ್ರ) ಹಣ ನೀಡಿ ದಿನಾಂಕ: 15.04.2006 ರಿಂದ 29.05.2006 (ಅಪರಾಹ್ನ 05.00 ಗಂಟೆ ವರೆಗೆ) ರವರೆಗೆ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ. ನಿಗದಿತ ಟೆಂಡರ್ ಫಾರಂ ಅಲ್ಲದೆ ಇತರೆ ಯಾವುದೇ ನಮೂನೆಯಲ್ಲಿ ಟೆಂಡರ್ ಸಲ್ಲಿಸಿದ್ದರೆ ಅದನ್ನು ತಿರಸ್ಕರಿಸಲಾಗುತ್ತದೆ. ಹೆಚ್ಚಿನ ಮಾಹಿತಿಯನ್ನು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರುರವರ ಕಛೇರಿಯಿಂದ 10-00 ಗಂಟೆಯಿಂದ ಸಾಯಂಕಾಲ 5.30 ಗಂಟೆಯವರೆಗೆ ಪಡೆಯಬಹುದು. (ಭಾನುವಾರ ಮತ್ತು ಇತರೆ ಸರ್ಕಾರಿ ರಜಾ ದಿನಗಳನ್ನು ಹೊರತುಪಡಿಸಿ)

ಸರಬರಾಜು ಮಾಡುವ ಕೊಕೋ ಕಸಿಗಿಡಗಳು / ಎಫ್-1 ಹೈಬ್ರಿಡ್ ಗಿಡಗಳ ದರವನ್ನು ಟೆಂಡರ್ ಫಾರಂನಲ್ಲಿ ನಮೂದಿಸಿ ಇದರ ಜೊತೆ ರೂ.50,000/- ಭದ್ರತಾ ಠೇವಣಿ ಹಣವನ್ನು ಕ್ರಾಸ್ಡ್ ಡಿಮಾಂಡ್ ಡ್ರಾಫ್ಟ್ ಮೂಲಕ ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರುರವರ ಹೆಸರಿನಲ್ಲಿ ಪಡೆದು ಟೆಂಡರ್ ಜೊತೆಗೆ ದಿನಾಂಕ: 30.05.2006 ರಂದು ಅಪರಾಹ್ನ 12.00 ಗಂಟೆಯ ಒಳಗೆ ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-4 ಇಲ್ಲಿಗೆ ಕಛೇರಿ ವೇಳೆಯಲ್ಲಿ ಅಂಚೆ ಮುಖಾಂತರ ಅಥವಾ ಮುದ್ದಾಂ ಮುಖಾಂತರ ತಲುಪಿಸಬೇಕು.

ಟೆಂಡರ್‌ಗಳನ್ನು ದಿನಾಂಕ: 30.05.2006 ರಂದು ಅಪರಾಹ್ನ 03.00 ಗಂಟೆಗೆ ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು ಇಲ್ಲಿ ತೆರೆಯಲಾಗುವುದು. ಈ ಪ್ರಕ್ರಿಯೆಯಲ್ಲಿ ಟೆಂಡರ್ ಒಪ್ಪಿಗೆಯಾಗದವರ ಭದ್ರತಾ ಠೇವಣಿ ಹಣವನ್ನು ಹಿಂತಿರುಗಿಸಲಾಗುವುದು. ಯಶಸ್ವಿಯಾದ ಟೆಂಡರ್‌ದಾರರು ಸಾಗಾಣಿಕೆ ವೆಚ್ಚ ತಾವೇ ಭರಿಸಿಕೊಂಡು ಸಂಬಂಧಪಟ್ಟ ಅಧಿಕಾರಿಗಳು ಸೂಚಿಸುವ ಸ್ಥಳಗಳಿಗೆ ಸರಬರಾಜು ಮಾಡಬೇಕು. ಹಾಗೂ ಟೆಂಡರ್ ಷರತ್ತುಗಳ ಬಗ್ಗೆ ಮಾಹಿತಿಯನ್ನು ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು ಇಲ್ಲಿಂದ ಪಡೆಯಬಹುದು.

ಪಿ.ಆರ್. 204 ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-4.

## ತೋಟಗಾರಿಕೆ ಇಲಾಖೆ
## ತೋಟಗಾರಿಕೆ ನಿರ್ದೇಶನಾಲಯರವರ ಕಛೇರಿ, ಲಾಲ್‌ಬಾಗ್, ಬೆಂಗಳೂರು-4
## ಟೆಂಡರ್ ಪ್ರಕಟಣೆ

**ಸಂಖ್ಯೆ: ತೋಇ/ತೋಬೆ/ಸತೋಅ-2/84/2005-06, ದಿನಾಂಕ: 15ನೇ ಏಪ್ರಿಲ್ 2006**

**ವಿಷಯ:** 2006-07ನೇ ಸಾಲಿಗೆ ರಾಷ್ಟ್ರೀಯ ತೋಟಗಾರಿಕೆ ಮಿಷನ್ ಹಾಗೂ ಕೇಂದ್ರ ಪುರಸ್ಕೃತ ಸಮಗ್ರ ಗೇರು ಅಭಿವೃದ್ಧಿ ಯೋಜನೆಯಡಿ ಬೇಕಾಗುವ ಗೇರು ಕಸಿ ಗಿಡಗಳನ್ನು ಪೂರೈಸಿಕೊಳ್ಳಲು ಟೆಂಡರ್ ಕರೆದಿರುವ ಬಗ್ಗೆ.

**ಉಲ್ಲೇಖ:** 1) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999.
2) ಸರ್ಕಾರದ ಆದೇಶ ಪತ್ರ ಸಂಖ್ಯೆ: ಎಸಿ.ಎನ್.ಡಿ.ಸಿ.ಡಿ:1530, ದಿನಾಂಕ: 7.11.2000.
3) ಸಂಖ್ಯೆ: ಕೃತೋಇ 97 ತೋಇವಿ 2006, ದಿನಾಂಕ: 04.04.2006

2006-07ನೇ ರಾಷ್ಟ್ರೀಯ ತೋಟಗಾರಿಕೆ ಮಿಷನ್ ಹಾಗೂ ಸಮಗ್ರ ಗೇರು ಅಭಿವೃದ್ಧಿ ಯೋಜನೆಗಳಡಿ ಬೇಕಾಗುವ ಗೇರು ಕಸಿ ಗಿಡಗಳನ್ನು ಸರಬರಾಜು ಮಾಡಲು ನೈಜ ಹಾಗೂ ಗೇರು ಮತ್ತು ಕೊಕೋ ಅಭಿವೃದ್ಧಿ ನಿರ್ದೇಶನಾಲಯ, ಕೊಚ್ಚಿನ್ ರವರಿಂದ ಅನುಮೋದಿಸಲ್ಪಟ್ಟಿರುವ ನರ್ಸರಿದಾರರು ಹಾಗೂ ಕಾರ್ಪೋರೇಷನ್ಸ್, ಸಂಶೋಧನಾ ಕೇಂದ್ರಗಳು ಹಾಗೂ ಕೃಷಿ ವಿಶ್ವವಿದ್ಯಾನಿಲಯ ರವರಿಂದ (genuine suppliers) ರವರಿಂದ ಟೆಂಡರನ್ನು ತೋಟಗಾರಿಕೆ ಇಲಾಖೆಯಿಂದ ಕರೆಯಲಾಗಿದೆ. ಟೆಂಡರ್‌ದಾರರು ದರಗಳನ್ನು ನಮೂದಿಸಿ ಮೊಹರಾದ ಟೆಂಡರನ್ನು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-4 ರವರಿಗೆ ಕಳುಹಿಸತಕ್ಕದ್ದು. ಮೊಹರಾದ ಲಕೋಟೆಯ ಮೇಲೆ "ಗೇರು ಕಸಿ ಗಿಡಗಳ ಸರಬರಾಜಿಗೆ ಟೆಂಡರ್ 2006-07" ಎಂದು ನಮೂದಿಸತಕ್ಕದ್ದು. ನಿಗದಿತ ಟೆಂಡರ್ ಫಾರಂಗಳನ್ನು ತೋಟಗಾರಿಕೆ ನಿರ್ದೇಶನಾಲಯದಲ್ಲಿ ರೂ.300-00 (ರೂ.ಮೂರು ನೂರು ಮಾತ್ರ) ಹಣ ನೀಡಿ ದಿನಾಂಕ: 15.04.2006 ರಿಂದ 30.05.2006 (ಅಪರಾಹ್ನ 05.00 ಗಂಟೆ ವರೆಗೆ) ರವರೆಗೆ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ. ನಿಗದಿತ ಟೆಂಡರ್ ಫಾರಂ ಅಲ್ಲದೆ ಇತರೆ ಯಾವುದೇ ನಮೂನೆಯಲ್ಲಿ ಟೆಂಡರ್ ಸಲ್ಲಿಸಿದ್ದರೆ ಅದನ್ನು ತಿರಸ್ಕರಿಸಲಾಗುತ್ತದೆ. ಹೆಚ್ಚಿನ ಮಾಹಿತಿಯನ್ನು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರುರವರ ಕಛೇರಿಯಿಂದ 10-00 ಗಂಟೆಯಿಂದ ಸಾಯಂಕಾಲ 5.30 ಗಂಟೆಯವರೆಗೆ ಪಡೆಯಬಹುದು. (ಭಾನುವಾರ ಮತ್ತು ಇತರೆ ಸರ್ಕಾರಿ ರಜಾ ದಿನಗಳನ್ನು ಹೊರತುಪಡಿಸಿ)

ಸರಬರಾಜು ಮಾಡುವ ಗೇರು ಕಸಿ ಗಿಡಗಳಿಗೆ ದರವನ್ನು ಟೆಂಡರ್ ಫಾರಂನಲ್ಲಿ ನಮೂದಿಸಿ ಇದರ ಜೊತೆ ರೂ.50,000/- ಭದ್ರತಾ ಠೇವಣಿ ಹಣವನ್ನು ಕ್ರಾಸ್ಡ್ ಡಿಮಾಂಡ್ ಡ್ರಾಫ್ಟ್ ಮೂಲಕ ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರುರವರ ಹೆಸರಿನಲ್ಲಿ ಪಡೆದು ಟೆಂಡರ್ ಜೊತೆಗೆ ದಿನಾಂಕ: 31.05.2006 ರಂದು ಅಪರಾಹ್ನ 12.00 ಗಂಟೆಯ ಒಳಗೆ ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-4 ಇಲ್ಲಿಗೆ ಕಛೇರಿ ವೇಳೆಯಲ್ಲಿ ಅಂಚೆ ಮುಖಾಂತರ ಅಥವಾ ಮುದ್ದಾಂ ಮುಖಾಂತರ ತಲುಪಿಸಬೇಕು.

ಟೆಂಡರ್‌ಗಳನ್ನು ದಿನಾಂಕ: 31.05.2006 ರಂದು ಅಪರಾಹ್ನ 03.00 ಗಂಟೆಗೆ ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು ಇಲ್ಲಿ ತೆರೆಯಲಾಗುವುದು. ಈ ಪ್ರಕ್ರಿಯೆಯಲ್ಲಿ ಟೆಂಡರ್ ಒಪ್ಪಿಗೆಯಾಗದವರ ಭದ್ರತಾ ಠೇವಣಿ ಹಣವನ್ನು ಹಿಂತಿರುಗಿಸಲಾಗುವುದು. ಯಶಸ್ವಿಯಾದ ಟೆಂಡರ್‌ದಾರರು ಸಾಗಾಣಿಕೆ ವೆಚ್ಚ ತಾವೇ ಭರಿಸಿಕೊಂಡು ಸಂಬಂಧಪಟ್ಟ ಅಧಿಕಾರಿಗಳು ಸೂಚಿಸುವ ಸ್ಥಳಗಳಿಗೆ ಸರಬರಾಜು ಮಾಡಬೇಕು. ಹಾಗೂ ಟೆಂಡರ್ ಷರತ್ತುಗಳ ಬಗ್ಗೆ ಮಾಹಿತಿಯನ್ನು ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು ಇಲ್ಲಿಂದ ಪಡೆಯಬಹುದು.

ಪಿ.ಆರ್. 205 ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-4.

## ಕರ್ನಾಟಕ ಲೋಕಸೇವಾ ಆಯೋಗ
## ಲೋಕಸೇವಾ ಆಯೋಗದ ಕಛೇರಿ, "ಪಾರ್ಕ್ ಹೌಸ್", ಬೆಂಗಳೂರು
### ತಿದ್ದುಪಡಿ ಸಂಖ್ಯೆ: ಇ.ಪ.(2) 013/2005-06/ಪಿಎಸ್‌ಸಿ, ದಿನಾಂಕ: 7ನೇ ಏಪ್ರಿಲ್ 2006

ಆಯೋಗದ ಅಧಿಸೂಚನೆ ಸಂಖ್ಯೆ: ಇಪ(1)2763/2005-06/ಪಿಎಸ್‌ಸಿ, ದಿನಾಂಕ: 21.02.2006 ರಲ್ಲಿ ಪ್ರಕಟಿಸಲಾಗಿರುವ 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶದಲ್ಲಿ "ಬೆಂಗಳೂರು" ಕೇಂದ್ರಕ್ಕೆ ಸಂಬಂಧಿಸಿದಂತೆ ಅಪೆಂಡಿಕ್ಸ್ 'ಎ' ರ ಅಡಿಯಲ್ಲಿ ಅಕೌಂಟ್ಸ್ ಹೈಯರ್ ವಿಷಯದ ಶೀರ್ಷಿಕೆಯ ಕೆಳಗೆ "ಸಾಮಾನ್ಯ ದರ್ಜೆ" ರಡಿಯಲ್ಲಿನ ನೋಂದಣಿ ಸಂಖ್ಯೆಗಳೊಂದಿಗೆ ನೋಂದಣಿ ಸಂಖ್ಯೆ: 61463ನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

ಕಾರ್ಯದರ್ಶಿ,

ಪಿ.ಆರ್. 206 ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

## ಪೊಲೀಸ್ ಅಧೀಕ್ಷಕರ ಕಛೇರಿ, ಉಡುಪಿ ಜಿಲ್ಲೆ, ಉಡುಪಿ
### ಅಧಿಸೂಚನೆ ಸಂಖ್ಯೆ: ಸಿಬ್ಬಂದಿ(2)/272/ಉಜಿ/2005, ದಿನಾಂಕ: 7ನೇ ಏಪ್ರಿಲ್ 2006

ಜಿಲ್ಲಾ ಪೊಲೀಸ್ ಕಛೇರಿ, ಉಡುಪಿಯ ಅಧಿಸೂಚನೆ ಸಂಖ್ಯೆ: ಸಿಬ್ಬಂದಿ(2)/272/ಉಜಿ/2005, ದಿನಾಂಕ: 14.09.2005 ಹಾಗೂ 25.11.2006 ರಲ್ಲಿ ಸಶಸ್ತ್ರ ಪಿಸಿ (ಪರಿಶಿಷ್ಟ ಜಾತಿ) ಬ್ಯಾಕ್ ಲಾಗ್ 2 ಹುದ್ದೆಗಳಿಗೆ ಅರ್ಜಿ ಕರೆದಿದ್ದು ಈ ಬಗ್ಗೆ ದಿನಾಂಕ: 07.04.2006 ರಂದು ನಡೆಸಿದ ದೈಹಿಕ ಸಂದರ್ಶನದಲ್ಲಿ 29 ರಿಂದ 40 ವರ್ಷದೊಳಗಿನ ವಿಭಾಗದಲ್ಲಿಯ ಅರ್ಹ ಅಭ್ಯರ್ಥಿಗಳ ಆಯ್ಕೆ ಪಟ್ಟಿಯಿಂದ ಈ ಕೆಳಕಂಡ ಅಭ್ಯರ್ಥಿಗಳನ್ನು ತಾತ್ಕಾಲಿಕವಾಗಿ ಆಯ್ಕೆ ಮಾಡಲಾಗಿದೆ.

| ಕ್ರ.ಸಂ. | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 1 | ಮಾಧವ, ತಂದೆ: ಕೃಷ್ಣ ನಾಯ್ಕ,<br>ಹೌಸಿಂಗ್ ಬೋರ್ಡ್ ಕಾಲೋನಿ ಹತ್ತಿರ, ಕುಂಬಾಶಿ, ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ. | ಎಸ್.ಸಿ. (ಇತರೆ) |
| 2 | ಕೃಷ್ಣ, ತಂದೆ: ರಾಮಯ್ಯ,<br>ನಾಲ್ಕನೇ ಮೈಲು, ಮುಲ್ಲಕಾಡು, ಕಾವೂರು ಅಂಚೆ-575015.<br>ಮಂಗಳೂರು ದ.ಕ.ಜಿಲ್ಲೆ. | ಎಸ್.ಸಿ. (ಇತರೆ) |

ನಿಯಮಾವಳಿ ಪ್ರಕಾರ 18 ರಿಂದ 28 ವರ್ಷದೊಳಗಿನ ವಿಭಾಗದಲ್ಲಿಯ ಅರ್ಹ ಅಭ್ಯರ್ಥಿಗಳ ಆಯ್ಕೆ ಪಟ್ಟಿಯಿಂದ ಹೆಚ್ಚುವರಿ ಆಯ್ಕೆ ಪಟ್ಟಿ ತಯಾರಿಸಿದ್ದು ವಿವರ ಈ ಕೆಳಕಂಡಂತಿದೆ.

| ಕ್ರ.ಸಂ. | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 1 | ರಾಘವೇಂದ್ರ, ತಂದೆ: ನಾರಾಯಣ,<br>ತಗ್ಗರ್ಸೆ, ಗುಡ್ಡೆ ಅಂಗಡಿ, ಕುಂದಾಪುರ ತಾಲ್ಲೂಕು-576214, ಉಡುಪಿ ಜಿಲ್ಲೆ. | ಎಸ್.ಸಿ. (ಇತರೆ) |

**ನಿಬಂಧನೆಗಳು:**

1. ಅಭ್ಯರ್ಥಿಗಳ ಚಾರಿತ್ರೆ, ನಡತೆ, ಜನ್ಮ ದಿನಾಂಕ ಮತ್ತು ವಿದ್ಯಾರ್ಹತೆಗಳ ಬಗ್ಗೆ ಶೈಕ್ಷಣಿಕ ಪ್ರಮಾಣ ಪತ್ರಗಳ ಸತ್ಯಾಪನೆ, ಜಾತಿ ಪ್ರಮಾಣ ಪತ್ರಗಳ ಪರಿಶೀಲನೆ, ಇತ್ಯಾದಿಗಳ ಪರಿಶೀಲನೆಗೊಳಪಟ್ಟು ಮೇಲೆ ನಮೂದಿಸಿದಂತೆ ತಾತ್ಕಾಲಿಕ ಆಯ್ಕೆ ಪಟ್ಟಿ ಹಾಗೂ ಹೆಚ್ಚುವರಿ ಆಯ್ಕೆ ಪಟ್ಟಿಯನ್ನು ತಯಾರಿಸಲಾಗಿದೆ.

2. ಈ ಪಟ್ಟಿಯ ಯಾವುದೇ ಅಭ್ಯರ್ಥಿಯ ನೇಮಕಾತಿ ಹಕ್ಕು ಎಂದು ಸಾಧಿಸುವಂತಿಲ್ಲ.
3. ಈ ಪಟ್ಟಿಯು ಜಾತಿ ದೃಢೀಕರಣ, ಸಕ್ಷಮ ಪ್ರಾಧಿಕಾರಿಯಿಂದ ಅಭ್ಯರ್ಥಿಯ ಗುಣ ನಡತೆ ಮತ್ತು ಪೂರ್ಣ ಚರಿತ್ರೆಗಳ ದೃಢೀಕರಣ ಮತ್ತು ಶೈಕ್ಷಣಿಕ ಮತ್ತು ಇತರೆ ಪ್ರಮಾಣ ಪತ್ರಗಳ ನಿಜತ್ವದ ಬಗ್ಗೆ ಪರಿಶೀಲನೆಗೊಳಪಟ್ಟಿದೆ.
4. ಈ ಪಟ್ಟಿಯು ಕರ್ನಾಟಕ ಆಡಳಿತ ನ್ಯಾಯ ಮಂಡಳಿ, ಉಚ್ಚ ನ್ಯಾಯಾಲಯಗಳ ಯಾವುದೇ ಆದೇಶಗಳಿದ್ದಲ್ಲಿ ಸದರಿ ಆದೇಶಗಳ ನಿಬಂಧನೆಗೆ ಒಳಪಟ್ಟಿದೆ.
5. ಈ ಪಟ್ಟಿಯು ಕರ್ನಾಟಕ ಸರ್ಕಾರದ ಮೀಸಲಾತಿ ಹಾಗೂ ಒಳಮೀಸಲಾತಿ ನಿಯಮಗಳನ್ವಯ ತಯಾರಿಸಲಾಗಿದೆ.
6. ಅಂತಿಮ ನೇಮಕಾತಿಯು ಯಾವುದೇ ಅಭ್ಯರ್ಥಿಗಳು ಅಪರಾಧ ಪ್ರಕರಣಗಳಲ್ಲೊಳಗೊಂಡಿಲ್ಲ ಎಂಬ ಬಗ್ಗೆ ಪರಿಶೀಲನೆಗೆ ಒಳಪಟ್ಟಿದೆ.

ಪಿ.ಆರ್. 208 ಪೊಲೀಸ್ ಅಧೀಕ್ಷಕರು, ಉಡುಪಿ ಜಿಲ್ಲೆ, ಉಡುಪಿ.

## ರೇಷ್ಮೆ ಇಲಾಖೆ

## ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಕಛೇರಿ, ಬೆಂಗಳೂರು

### ಅಧಿಸೂಚನೆ ಸಂಖ್ಯೆ: ಸಿ1(6):ರೇನಿ:20:ಬ್ಯಾಕ್‌ಲಾಗ್:2001-02, ದಿನಾಂಕ: 23ನೇ ಜನವರಿ 2006

ಈ ಕಛೇರಿಯ ಅಧಿಸೂಚನೆ ಸಂಖ್ಯೆ: ಸಿ1(6):ರೇನಿ:20:ಬ್ಯಾಕ್‌ಲಾಗ್:2001-02, ದಿನಾಂಕ: 24.08.2005 ರಲ್ಲಿ ರೇಷ್ಮೆ ಇಲಾಖೆಯಲ್ಲಿ ರೇಷ್ಮೆ ಪ್ರದರ್ಶಕರ ಬ್ಯಾಕ್‌ಲಾಗ್ 1 ಹುದ್ದೆಯನ್ನು ಭರ್ತಿ ಮಾಡುವ ಸಂಬಂಧ **ಪರಿಶಿಷ್ಟ ಜಾತಿಗೆ** ಸೇರಿದ ಮಾಜಿ ಸೈನಿಕ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿತ್ತು. ಅರ್ಹ ಅಭ್ಯರ್ಥಿಗಳು ಅರ್ಜಿ ಸಲ್ಲಿಸದೆ ಇರುವುದರಿಂದ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ:97:ಸೇನೆನಿ:2002, ದಿನಾಂಕ: 22.11.2002ರ ಸೂಚನೆಯಂತೆ ಮಾಜಿ ಸೈನಿಕ ಅಭ್ಯರ್ಥಿಗಳು ಲಭ್ಯವಿಲ್ಲದಿರುವುದರಿಂದ ಆಯಾ ವರ್ಗಕ್ಕೆ ಸೇರಿದ ಇತರೆ ಅಭ್ಯರ್ಥಿಯನ್ನು ಆ ಹುದ್ದೆಗೆ ಕರ್ನಾಟಕ ರಾಜ್ಯ ನಾಗರೀಕ ಸೇವಾ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ವ್ಯಕ್ತಿಗಳಿಗೆ ಮೀಸಲಿರಿಸಿದ ತುಂಬದೆ ಇರುವ ಖಾಲಿ ಹುದ್ದೆಗಳು) (ವಿಶೇಷ ನೇಮಕಾತಿ) ನಿಯಮಗಳು 2001ರ ಅಡಿಯಲ್ಲಿ ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ಅಧಿಸೂಚನೆ ಸಂಖ್ಯೆ: ಸಿಬ್ಬಂದಿ1(6):ರೇನಿ:20: ಬ್ಯಾಕ್‌ಲಾಗ್:2001-02, ದಿನಾಂಕ: 23.11.2005 ರಲ್ಲಿ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಿ, ಆ ಆಯ್ಕೆ ಪಟ್ಟಿಯಿಂದ ಬಾಧಿತರಾಗುವ ಅಭ್ಯರ್ಥಿಗಳು ತಮ್ಮ ಆಕ್ಷೇಪಣೆಗಳನ್ನು ದಿನಾಂಕ: 30.12.2005 ರೊಳಗಾಗಿ ಸಲ್ಲಿಸಬಹುದೆಂದು ಸೂಚಿಸಲಾಗಿತ್ತು. ನಿಗದಿತ ಅವಧಿಯೊಳಗೆ ಒಬ್ಬ ಅಭ್ಯರ್ಥಿಯಿಂದ ಆಕ್ಷೇಪಣೆ ಸ್ವೀಕರಿಸಲಾಗಿದ್ದು, ಪರಿಶೀಲಿಸಲಾಗಿ, ನಿಯಮಾನುಸಾರವಾಗಿ ಪರಿಗಣಿಸಲು ಅರ್ಹವಿರುವುದಿಲ್ಲ. ಈ ಕುರಿತು ಈಗಾಗಲೇ ಸರ್ಕಾರದಿಂದ ಸ್ಪಷ್ಟೀಕರಣ ಪಡೆಯಲಾಗಿದೆ. ಆದ್ದರಿಂದ ಆಕ್ಷೇಪಣೆಯನ್ನು ಕೈಬಿಡಲಾಗಿದೆ. ಈ ಹಿನ್ನೆಲೆಯಲ್ಲಿ ಸದರಿ ನಿಯಮಗಳ ನಿಯಮ-6 ರನ್ವಯ ಕೆಳಕಂಡಂತೆ ಅಂತಿಮ ಆಯ್ಕೆ ಪಟ್ಟಿಯನ್ನು ಅಭ್ಯರ್ಥಿಗಳ ಮಾಹಿತಿಗಾಗಿ ಪ್ರಕಟಿಸಲಾಗಿದೆ.

**ಮುಖ್ಯಪಟ್ಟಿ**

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | ವಿದ್ಯಾರ್ಹತೆ ಮತ್ತು ಶೇಕಡ ಅಂಕಗಳು | ಹುದ್ದೆಗಳ ಮೀಸಲಾತಿ ವರ್ಗೀಕರಣ |
|---|---|---|---|---|
| 1 | ಕೆ.ಎಸ್. ಇಂದಿರಾ ಬಿನ್ ಕೆ. ಸಾವಕಯ್ಯ,<br>ನಂ.146, ಎಲ್‌ಐಜಿ, 2ನೇ ಹಂತ, 4ನೇ ಮುಖ್ಯ ರಸ್ತೆ, 8ನೇ ಕ್ರಾಸ್,<br>ಕೆ.ಹೆಚ್.ಬಿ. ಕಾಲೋನಿ, ಬಸವೇಶ್ವರ ನಗರ, ಬೆಂಗಳೂರು. | 1.8.1968 | ಪಿ.ಯು.ಸಿ. 66.5 | ಇತರೆ |

**ಹೆಚ್ಚುವರಿ ಪಟ್ಟಿ**

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | ವಿದ್ಯಾರ್ಹತೆ ಮತ್ತು ಶೇಕಡ ಅಂಕಗಳು | ಹುದ್ದೆಗಳ ಮೀಸಲಾತಿ ವರ್ಗೀಕರಣ |
|---|---|---|---|---|
| 1 | ಮಚೀಂದರ ಬಿನ್ ಗ್ಯಾನೋಬಾ ಭೋಸಲೆ<br>ಮು: ರಕ್ಶಾಳ (ಕೆ), ಅಂಚೆ: ಠಾಣಾಕುಶನೂರು,<br>ತಾ: ಔರಾದ್, ಜಿಲ್ಲೆ: ಬೀದರ್. | 10.06.1975 | ಪಿ.ಯು.ಸಿ. 63.66 | ಪರಿಶಿಷ್ಟ ಜಾತಿ<br>ಇತರೆ |

ಆಯ್ಕೆ ಪ್ರಾಧಿಕಾರ,
ಪಿ.ಆರ್. 209 ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಬೆಂಗಳೂರು.

**FORM IV**
**(See Rule 12)**
**NOTICE**

It is hereby notified that the undersigned has changed his name from **DR. HEMALATHA F. SUNAGAR** to **DR. SUMAN SHIVAKUMAR DAMBAL.**

PD-92 **DR. HEMALATHA.F.SUNAGAR**

**FORM IV**
**(See Rule 12)**
**NOTICE**

It is hereby notified that the undersigned has changed her name from **MALAGOUDA ANNAPPA IMMADI** to **MALLAGOUDA BHIMAPPA IMMADI**

PD-93 **MALAGOUDA ANNAPPA IMMADI**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

### ಅಧಿಸೂಚನೆ ಸಂಖ್ಯೆ: ಸಿಆಸುಇ 48 ಆಸೇವ 2006, ದಿನಾಂಕ: 6ನೇ ಏಪ್ರಿಲ್ 2006

ಕರ್ನಾಟಕ ಗೆಜೆಟೆಡ್ ಪ್ರೊಬೆಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು, 1997 ರಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಈ ಕೆಳಕಂಡ ಅಭ್ಯರ್ಥಿಗಳನ್ನು ಕೆ.ಎ.ಎಸ್. ಗ್ರೂಪ್-ಎ (ಕಿರಿಯ ಶ್ರೇಣಿ) ಹುದ್ದೆಗೆ ಆಯ್ಕೆ ಮಾಡಿ ಆಯ್ಕೆ ಪಟ್ಟಿಯನ್ನು ಅಧಿಸೂಚನೆ ಸಂಖ್ಯೆ: Conf.25/2005-06/PSC, ದಿನಾಂಕ: 28.02.2006ರ ರಾಜ್ಯಪತ್ರದಲ್ಲಿ ಪ್ರಕಟಿಸಿದೆ.

| ಕ್ರ.ಸಂ. | ಹೆಸರು | ವಿಳಾಸ |
|---|---|---|
| 1 | ಶ್ರೀ ಬಿ.ಸಿ. ಸತೀಶ | ಪಶುವೈದ್ಯ ಅಧಿಕಾರಿ, ಕ್ವಾನ್ಟೈನ್ ರ್‍ಯಾಬೀಸ್ ಕಂಟ್ರೋಲ್ ಯುನಿಟ್, ಧನ್ವಂತರಿ ರಸ್ತೆ, ಮೈಸೂರು-570001. |
| 2 | ಶ್ರೀ ಹೆಚ್. ಬಸವರಾಜೇಂದ್ರ | ನಂ.382, 13ನೇ ಮೈನ್, ಆರ್.ಎಂ.ವಿ. ಎಕ್ಸ್‌ಟೆನ್ಷನ್, ಸದಾಶಿವನಗರ, ಬೆಂಗಳೂರು-560080. |
| 3 | ಶ್ರೀ ಹೆಚ್.ಎನ್. ಗೋಪಾಲಕೃಷ್ಣ | ಕೇರಾಫ್ ಆರ್. ರಾಜಣ್ಣ, ಮನೆ ನಂ.74, ಸುಬ್ರಮಣ್ಯ ದೇವಸ್ಥಾನದ ಹಿಂದೆ, ಬನಗಿರಿನಗರ, ಬನಶಂಕರಿ 3ನೇ ಹಂತ, ಬೆಂಗಳೂರು-560085. |
| 4 | ಶ್ರೀ ಎನ್. ಶಿವಶಂಕರ | ಕೇರಾಫ್ ರಾಮೇಗೌಡ, ನಂ.40, 5ನೇ ಬಿ-ಕ್ರಾಸ್, 1ನೇ ಮೈನ್, ಡಿಫೆನ್ಸ್ ಕಾಲೋನಿ, ಹೆಸರಘಟ್ಟ ರಸ್ತೆ, ಟಿ.ದಾಸರಹಳ್ಳಿ, ಬೆಂಗಳೂರು-560073. |
| 5 | ಶ್ರೀಮತಿ ಅರುಂಧತಿ ಚಂದ್ರಶೇಖರ್ | ಬಿನ್ ಡಾ: ಟಿ.ಚಂದ್ರಶೇಖರ್, ನಂ.22, ಅನುಗ್ರಹ, 2ನೇ ಮೈನ್, ಮುನೇಶ್ವರ ಬ್ಲಾಕ್, ಹರಿನಗರ ಕ್ರಾಸ್, ಕೋಣನಕುಂಟೆ, ಬೆಂಗಳೂರು-560062. |
| 6 | ಶ್ರೀ ಎಂ.ಆರ್. ರವಿ | ನಂ.271, "ಬೆಳಕು" ವಾಟರ್ ಟ್ಯಾಂಕ್ ಹಿಂದೆ, ಆಲನಹಳ್ಳಿ ಬಡಾವಣೆ, ಮೈಸೂರು-570011. |
| 7 | ಶ್ರೀ ಪಿ.ಎನ್. ರವೀಂದ್ರ | ಬಿನ್ ಪಿ.ಹೆಚ್. ನಿಂಗಪ್ಪ, ಎ.ಎಂ.ಜಿ.ಹೆಚ್.ಪಿ.ಎಸ್., ಕಲ್ಲೇನಹಳ್ಳಿ, ತ್ಯಾಗದಕಟ್ಟೆ ಪೋಸ್ಟ್, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ-577549. |
| 8 | ಶ್ರೀಮತಿ ಕೆ. ಜ್ಯೋತಿ | ನಂ.823, 6ನೇ ಕ್ರಾಸ್, 5ನೇ ಮೈನ್, ಎಂ.ಸಿ. ಲೇಔಟ್, ವಿಜಯನಗರ, ಬೆಂಗಳೂರು-560040. |
| 9 | ಶ್ರೀಮತಿ ಸಿ.ಎನ್. ಮೀನಾ ನಾಗರಾಜ್ | ನಂ.606:614, ಹೊಸ ಕಾಮಾಕ್ಷಿ ಲೇಔಟ್, 1ನೇ ಹಂತ, 1ನೇ ಎ-ಮುಖ್ಯ ರಸ್ತೆ, ಬಸವೇಶ್ವರ ನಗರ, ಬೆಂಗಳೂರು-560079. |
| 10 | ಶ್ರೀ ಅಕ್ರಂ ಪಾಷ | ಬಿನ್ ನನ್ನೇ ಜಾನ್, ಕೇರಾಫ್ ರಿಯಾಜ್ ಬಾಶ, ನಂ.564, ದರ್ಗಾ ಮೊಹಲ್ಲ, ಚಿಕ್ಕಬಳ್ಳಾಪುರ-562101. |
| 11 | ಶ್ರೀಮತಿ ಕೆ. ಲೀಲಾವತಿ | ಬಿನ್ ಜಿ.ಎನ್. ಕಾಮಣ್ಣ, ನಂ.61, 3ನೇ ಕ್ರಾಸ್, ನಂಜರೆಡ್ಡಿ ಕಾಲೋನಿ, ಹೆಚ್.ಎ.ಎಲ್.ಪೋಸ್ಟ್, ಬೆಂಗಳೂರು-560017. |
| 12 | ಶ್ರೀ ಪಿ. ವಸಂತಕುಮಾರ್ | ಬಿನ್ ಪುಟ್ಟಮಾದಯ್ಯ, ನಂ.1718:ಎ, 11ನೇ ಮುಖ್ಯ ರಸ್ತೆ, ಬೈಯಣ್ಣ ಗಾರ್ಡನ್, ಪ್ರಕಾಶ್ ನಗರ, ಬೆಂಗಳೂರು-560021. |
| 13 | ಶ್ರೀ ಕರೀಗೌಡ | ಬಿನ್ ಸಿದ್ದೇಗೌಡ, ಚಿಕ್ಕೋನಹಳ್ಳಿ, ಕೆಳಘಟ್ಟ ಪೋಸ್ಟ್, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ-571419. |
| 14 | ಶ್ರೀ ಶಿವನಂದ ಕಾಪನಿ | ಬಿನ್ ಭೀಮಪ್ಪ ಕಾಪನಿ, ಗುರುಕೃಪ, ಬಸವನಗರ, ಗೋಕಾಕ್, ಬೆಳಗಾಂ ಜಿಲ್ಲೆ-591307. |
| 15 | ಶ್ರೀಮತಿ ಗಂಗುಬಾಯಿ ರಮೇಶ್ ಮಾನಕರ | ಬಿನ್ ರಮೇಶ್ ಮಾನಕರ, ಬಸ್ ನಿಲ್ದಾಣದ ಹತ್ತಿರ, ಸಿಂದಗಿ, ಬಿಜಾಪುರ ಜಿಲ್ಲೆ-586128. |
| 16 | ಶ್ರೀಮತಿ ಕವಿತಾ ಎಸ್.ಮನ್ನಿಕೇರಿ | ನಂ.191, 8ನೇ ಕ್ರಾಸ್, ಶಕ್ತಿ ಗಣಪತಿ ನಗರ, ಬಸವೇಶ್ವರ ನಗರ, ಬೆಂಗಳೂರು-560079. |
| 17 | ಶ್ರೀ ಆರ್.ಎಸ್. ಪೆದ್ದಪ್ಪಯ್ಯ | ಬಿನ್ ಸಂಜೀವರಾಯಪ್ಪ, ರಾಮಚಂದ್ರಪುರ ಪೋಸ್ಟ್, ಗೌರಿಬಿದನೂರು ತಾಲ್ಲೂಕು, ಕೋಲಾರ ಜಿಲ್ಲೆ. |
| 18 | ಶ್ರೀ ಜಿ.ಸಿ. ವೃಷಬೇಂದ್ರಮೂರ್ತಿ | ನಂ.91/ಎ, ಎಂ.ಇ.ಎಸ್. ಕಾಲೋನಿ, ಕೊನೇನ ಅಗ್ರಹಾರ, ಹೆಚ್.ಎ.ಎಲ್., ಬೆಂಗಳೂರು-560017. |

2) ಮೇಲ್ಕಂಡ ಅಭ್ಯರ್ಥಿಗಳನ್ನು ರೂ.8000-13440ರ ವೇತನ ಶ್ರೇಣಿಯ ಕೆ.ಎ.ಎಸ್. ಸಮೂಹ-ಎ ಕಿರಿಯ ಶ್ರೇಣಿ ಹುದ್ದೆಗೆ ಪರಿವೀಕ್ಷಣೆಯ ಮೇಲೆ (on probation) ಈ ಮೂಲಕ ನೇಮಕ ಮಾಡಲಾಗಿದೆ.

3) ಪರೀಕ್ಷಾರ್ಥಿಗಳ ಪರೀಕ್ಷಾರ್ಥ ಅವಧಿಯು ಎರಡು ವರ್ಷಗಳಾಗಿರುತ್ತವೆ. ಈ ಅವಧಿಯಲ್ಲಿ ಪರೀಕ್ಷಾರ್ಥಿಗಳು ಕೆ.ಎ.ಎಸ್. ಗ್ರೂಪ್-ಎ (ಕಿರಿಯ ಶ್ರೇಣಿ) ಹುದ್ದೆಗೆ ನಿಗದಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಬೇಕು.

4) ಈ ನೇಮಕಾತಿಯು ಭಾರತದ ಸರ್ವೋಚ್ಚ ನ್ಯಾಯಾಲಯದ ಮುಂದಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232/1999, ಕರ್ನಾಟಕ ಉಚ್ಚ ನ್ಯಾಯಾಲಯದ ಮುಂದಿರುವ ರಿಟ್ ಅರ್ಜಿ ಸಂಖ್ಯೆ: 27140/2005 ಮತ್ತು ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಮುಂದಿರುವ ಅರ್ಜಿಗಳ ಸಂಖ್ಯೆ: 4184/2003, 1512/2003, 1741/2003 ಮತ್ತು 1172/2006 ಗಳಲ್ಲಿ ನ್ಯಾಯಾಲಯಗಳು ನೀಡುವ ಅಂತಿಮ ತೀರ್ಪಿಗೊಳಪಟ್ಟಿರುತ್ತದೆ.

5) ಈ ಅಧಿಸೂಚನೆಯನ್ನು ನೋಂದಾಯಿತ ಅಂಚೆ ಮುಖಾಂತರ ರವಾನಿಸಿದ ದಿನಾಂಕದಿಂದ 15 ದಿನಗಳೊಳಗೆ ಅಭ್ಯರ್ಥಿಯು ಸರ್ಕಾರದ ಉಪಕಾರ್ಯದರ್ಶಿ, ಸಿ.ಆ.ಸು.ಇ. (ಸೇವೆಗಳು), ಕೊಠಡಿ ಸಂಖ್ಯೆ: 15, ವಿಧಾನ ಸೌಧ, ಇವರ ಮುಂದೆ ಕರ್ತವ್ಯಕ್ಕೆ ಹಾಜರಾಗತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಅಭ್ಯರ್ಥಿಯ ನೇಮಕಾತಿಯು ರದ್ದಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 210

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಕರ್ನಾಟಕ ಲೋಕಸೇವಾ ಆಯೋಗ

## ಲೋಕಸೇವಾ ಆಯೋಗದ ಕಛೇರಿ, "ಉದ್ಯೋಗ ಸೌಧ" ಬೆಂಗಳೂರು

**ತಿದ್ದುಪಡಿ ಸಂಖ್ಯೆ: ಇ.ಪ.(2)28/2006-07/ಪಿಎಸ್‌ಸಿ, ದಿನಾಂಕ: 18ನೇ ಏಪ್ರಿಲ್ 2006**

ಆಯೋಗದ ಅಧಿಸೂಚನೆ ಸಂಖ್ಯೆ: ಇಪ(1)2763/2005-06/ಪಿಎಸ್‌ಸಿ, ದಿನಾಂಕ: 21.02.2006 ರಲ್ಲಿ ಪ್ರಕಟಿಸಲಾಗಿರುವ 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶದಲ್ಲಿ "ತುಮಕೂರು" ಕೇಂದ್ರಕ್ಕೆ ಸಂಬಂಧಿಸಿದಂತೆ ಅಪೆಂಡಿಕ್ಸ್ 'ಎ' ರ ಅಡಿಯಲ್ಲಿ 'ರಿಜಿಸ್ಟ್ರೇಷನ್' ವಿಷಯದ ಶೀರ್ಷಿಕೆಯ ಕೆಳಗೆ "ಸಾಮಾನ್ಯ ದರ್ಜೆ" ರಡಿಯಲ್ಲಿನ ನೋಂದಣಿ ಸಂಖ್ಯೆಗಳೊಂದಿಗೆ ನೋಂದಣಿ ಸಂಖ್ಯೆ: 93689ನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

ಕಾರ್ಯದರ್ಶಿ,

ಪಿ.ಆರ್. 211

ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

## ಕರ್ನಾಟಕ ಲೋಕಸೇವಾ ಆಯೋಗ

## ಲೋಕಸೇವಾ ಆಯೋಗದ ಕಛೇರಿ, "ಪಾರ್ಕ್ ಹೌಸ್" ಬೆಂಗಳೂರು

**ತಿದ್ದುಪಡಿ ಸಂಖ್ಯೆ: ಇ.ಪ.(2)2488/2005-06/ಪಿಎಸ್‌ಸಿ, ದಿನಾಂಕ: 31ನೇ ಮಾರ್ಚ್ 2006**

ಆಯೋಗದ ದಿನಾಂಕ: 21.02.2006 ಅಧಿಸೂಚನೆಯಲ್ಲಿ ಪ್ರಕಟಿಸಲಾಗಿರುವ 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶದಲ್ಲಿ "ಕೋಲಾರ" ಕೇಂದ್ರಕ್ಕೆ ಸಂಬಂಧಿಸಿದಂತೆ ಅಪೆಂಡಿಕ್ಸ್ 'ಎ'ರ ಅಡಿಯಲ್ಲಿ ಪಿ.ಡಬ್ಲ್ಯೂ.ಡಿ. ಹೈಯರ್ ಭಾಗ-2 ಶೀರ್ಷಿಕೆಯ ಕೆಳಗೆ "ಸಾಮಾನ್ಯ ದರ್ಜೆ" ರಡಿಯಲ್ಲಿನ ನೋಂದಣಿ ಸಂಖ್ಯೆ: 83353 ನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

ಕಾರ್ಯದರ್ಶಿ,

ಪಿ.ಆರ್. 212

ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

## FORM IV
**(See Rule 12)**
## NOTICE

It is hereby notified that the undersigned has changed his name from **ABHINANDAN H.** to **ABHISHEK ADITHYA H.**

PD-95

**ABHINANDAN H.**

## PROCEEDINGS OF THE KARNATAKA STATE BOARD OF WAKFS BANGALORE-52

**Sub:** Regarding Appointment of Muthawalli to Dargah Hazrath Hamza Hussaini Hafiz Hussain Mosque, Khabrasthan situated in CTS. No.161/A1 of Ward No.VI of Bijapur.

**PREAMBLE:**

Dargah Hazrath Hamza Hussaini Hafiz Hussaini Mosque & Khabrasthan, situated in CTS.No.161/A/1 of Ward No.VI of Bijapur, is a registered Wakf Institution. The Chairman, DWAC, Bijapur, vide his report No.DWAC/CMC/4/BJR/05-06/181 dated: 13.5.2005, has reported to appoint Smt. Farzana Begum D/o Sri Syed Abdul Khader Hussaini Jagirdar, as Muthawalli.

Accordingly Public Notice dated: 7.6.2005 was issued for calling objections/suggestions if any. The Chairman, DWAC, Bijapur, vide his report No.DWAC/CMC/3/BJR/05-06/223 dated: 15.6.2005, has reported to accord approval to the Muthawalli proposal. Since there no objections suggestions were received.

Whereas the matter was placed before the Board meeting held on 31.12.2005, vide subject No.44, and it is resolved to approve the proposal. Hence this order.

**ORDER NO. KTW/CMC/27/BJR/2005-06, DATED: 24th JANUARY 2006**

In view of the facts stated in the above Preamble and under Section 63 of the Wakf Act 1995, Smt. Sayyada Farzana Begum D/o Janab Syed Abdul Khader Hussaini Jagirdar is appointed as Muthawalli of Dargah Hazrath Hamza Hussaini Hafiz Hussain Mosque & Khabrasthan, for a period of three (3) years subject to condition that the Muthawalli shall function in accordance with provision of the Wakf Act 1995 and Karnataka Wakf Rules 1997.

BY ORDER OF THE BOARD

PD-49

Chief Executive Officer, Karnataka State Board of Wakfs.

## ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಚಿಕ್ಕಮಗಳೂರು ವೃತ್ತ, ಚಿಕ್ಕಮಗಳೂರು

### ಅಧಿಸೂಚನೆ ಸಂಖ್ಯೆ: ಎ2/ಹರಾಜು/ಸಿಆರ್-1/2006-07, ದಿನಾಂಕ: 10ನೇ ಏಪ್ರಿಲ್ 2006

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಕೆಳಗೆ ನಮೂದಿಸಿದ ನಾಟಾ ಸಂಗ್ರಹಾಲಯಗಳಲ್ಲಿ ಲಭ್ಯವಿರುವ ಬೀಟೆ ಸಾಗುವಾನಿ ಇತರೆ ಜಾತಿಯ ನಾಟಾ ಹಾಗೂ ಸೌದೆಗಳನ್ನು ಡಿಪೋವಿನ ಮುಂದೆ ಸೂಚಿಸಿದ ದಿನಾಂಕದಂದು ಬಹಿರಂಗ ಹರಾಜು ಮಾರಾಟದಲ್ಲಿ ವಿಕ್ರಯಿಸಲು ಸಾಮಾನ್ಯ ಅವಗಾಹನೆಗಾಗಿ ಪ್ರಕಟಿಸಿದೆ.

| ಕ್ರ. ಸಂ. | ವಿಭಾಗದ ಮತ್ತು ಡಿಪೋದ ಹೆಸರು | ಹರಾಜು ದಿನಾಂಕ | ಹರಾಜಿಗಿಟ್ಟ ನಾಟಾ ಸೌದೆಯ ಅಂದಾಜು ಪ್ರಮಾಣ (ಘ.ಮೀ.ಗಳಲ್ಲಿ) | | | | | | |
|---|---|---|---|---|---|---|---|---|---|
| | | | ಬೀಟೆ | ಸಾಗುವಾನಿ | ಕಾಡು ಜಾತಿ | ಇತರೆ ಜಾತಿಯ ನಾಟ | ಬಿಲೆಟ್ಸ್ | ಸೌದೆ | ಪೋಲ್ಸ್ (ಸಂಖ್ಯೆ) |
| 1 | 2 | 3 | 4 | 5 | 6 | 7 | 8 | 9 | 10 |
| a) | ಚಿಕ್ಕಮಗಳೂರು ವಿಭಾಗ:<br>ಕಡೂರು ಸರ್ಕಾರಿ ನಾಟಾ ಸಂಗ್ರಹಾಲಯ | 05.05.06 | 32.000 | - | - | 1.500 (ನಂದಿ)<br>5.000 (ಹೊನ್ನೆ)<br>15.000 (ಮತ್ತಿ)<br>2.000 (ಎತ್ತಗ)<br>137.000 (ಅಕೇಶಿಯಾ)<br>10.000 (ಇತರೆ ಜಾತಿ ನಾಟಾ) | 32.000<br>(ಅಕೇಶಿಯಾ) | 164.000<br>(ಬೀಟೆ) | - |
| b) | ಚಿಕ್ಕಮಗಳೂರು ಸರ್ಕಾರಿ ನಾಟಾ ಸಂಗ್ರಹಾಲಯ, | 06.05.06 | 7.102 | 1,834 | - | 0.324 (ನಂದಿ)<br>1.031 (ಹೊನ್ನೆ)<br>3.078 (ಇತರೆ ಜಾತಿ ನಾಟಾ)<br>0.078 (ತೇಗದ ಸೈಜು) | 35.000 (ಹೊನ್ನೆ) | 75.000<br>(ಕಾಡು ಜಾತಿ) | 4050 (ಅಕೇಶಿಯಾ)<br>90 (ನೀಲಗಿರಿ)<br>1375 (ಬೆತ್ತ) |
| I<br>a) | ಕೊಪ್ಪ ವಿಭಾಗ:<br>ನರಸಿಂಹರಾಜಪುರ ಸರ್ಕಾರಿ ನಾಟಾ ಸಂಗ್ರಹಾಲಯ | 07.05.06<br>08.05.06 | 20.00 (ಸರ್ಕಾರಿ)<br>20.000 (ಖಾಸಗಿ) | 1.000 | - | 300.000 (ಜಂಬೆ)<br>400.000 (ಅಕೇಶಿಯಾ)<br>200.000 (ಇತರೆ ಜಾತಿ ನಾಟಾ) | 200.000<br>(ಅಕೇಶಿಯಾ) | 15.000 | 3000 (ಅಕೇಶಿಯಾ) |
| b) | ಸಂಗಮೇಶ್ವರಪೇಟೆ ನಾಟಾ ಸಂಗ್ರಹಾಲಯ | 09.05.06<br>10.06.06 | 15.000<br>(ಸರ್ಕಾರಿ) | - | - | 400.000 (ಅಕೇಶಿಯಾ ನಾಟಾ)<br>400.000 ಇತರೆ ಜಾತಿ ನಾಟಾ) | 200.000<br>(ಅಕೇಶಿಯಾ) | 20.000 | 900 (ಸಾಗುವಾನಿ)<br>2000 (ಅಕೇಶಿಯಾ) |

ಪಿ.ಆರ್. 207

ಅರಣ್ಯ ಸಂರಕ್ಷಣಾಧಿಕಾರಿ,
ಚಿಕ್ಕಮಗಳೂರು ವೃತ್ತ, ಚಿಕ್ಕಮಗಳೂರು.